# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 227 (1806) |
| ಸದಸ್ಯರ ಹೆಸರು | : | ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 24-03-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ನಗರದ 15-20 ಕಿ.ಮೀ ದೂರದಲ್ಲಿ ಹೆಲಿಕಾಪ್ಟರ್ ಕಾರ್ಖಾನೆ /ಫುಡ್ ಪಾರ್ಕ್/ ಇಸ್ರೋ ಸಂಸ್ಥೆ/ ಏಷ್ಯಾ ಖಂಡದಲ್ಲಿಯೇ ಪ್ರಥಮವಾಗಿರುವ ಕೈಗಾರಿಕಾ ಪ್ರದೇಶ/ ಬಾಂಬೆ-ಬೆಂಗಳೂರು-ಚೆನ್ನೈ ಇಂಡ್ರಸ್ಟ್ರೀಯಲ್ ಕಾರಿಡಾರ್ ಹೀಗೆ ಇನ್ನು ಹತ್ತು ಹಲವಾರು ತುಮಕೂರು ಸುತ್ತ-ಮುತ್ತಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ತುಮಕೂರು ಮಹಾನಗರವು ದಿನೇ ದಿನೇ ವಿಸ್ತಾರವಾಗಿ ಬೆಳೆಯುತ್ತಿರುವುದರಿಂದ ಬೆಂಗಳೂರಿನ ಬಿ.ಡಿ.ಎ ಮಾದರಿಯಲ್ಲಿ ಹೊರ ವರ್ತುಲ ರಸ್ತೆಯನ್ನು ನಿರ್ಮಿಸಲಾಗುವುದೇ; | ಬೆಂಗಳೂರಿನ ಬಿಡಿಎ ಮಾದರಿಯಲ್ಲಿ ಹೊರ ವರ್ತುಲ ರಸ್ತೆಯನ್ನು ನಿರ್ಮಿಸುವ ಯಾವ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ.<br>ಆದರೆ, ಸ್ಮಾರ್ಟ್ ಸಿಟಿ ಅಭಿಯಾನದಲ್ಲಿ ಹಾಲಿ ಇರುವ ರಿಂಗ್ ರೋಡ್ ಪುನರ್ ಅಭಿವೃದ್ಧಿಯನ್ನು (Redevelopment) ಕೈಗೊಳ್ಳಲಾಗುತ್ತಿದೆ. |
| ಇ) | ತುಮಕೂರು ಮಹಾನಗರದೊಳಗೆ ರಾಷ್ಟ್ರೀಯ ಹೆದ್ದಾರಿ ವಾಹನಗಳು ಸಂಚರಿಸುತ್ತಿರುವ ಕಾರಣ, ದಟ್ಟಣೆ ಹೆಚ್ಚಿರುವುದರಿಂದ ನಗರದ ಹೊರ ಭಾಗದಲ್ಲಿ ದಾಬಸ್ ಪೇಟೆ-ಕೊರಟಗೆರೆ-ಶಿರಾ-ಗುಬ್ಬಿ-ಕುಣಿಗಲ್ ಮತ್ತು ದಾಬಸ್‌ಪೇಟೆ ಮಾರ್ಗದಲ್ಲಿ ಮುಂದಿನ 10-15 ವರ್ಷಗಳ ಭವಿಷ್ಯದ ಹಿತದೃಷ್ಟಿಯಿಂದ ರಿಂಗ್ ರಸ್ತೆ (ಫೆರಿಫರಲ್ ರಸ್ತೆ) ನಿರ್ಮಿಸಲು ಸರ್ಕಾರಕ್ಕಿರುವ ತೊಂದರೆ ಏನು; ಈ ಫೆರಿಫರಲ್ ರಸ್ತೆ ನಿರ್ಮಿಸುವ ಯೋಜನೆಯನ್ನು ಸರ್ಕಾರ ಕಾರ್ಯಗತಗೊಳಿಸುವುದು ಯಾವಾಗ? | ತುಮಕೂರು ನಗರದಲ್ಲಿ ಹಾಲಿ ಇರುವ 10.5 ಕಿ.ಮೀ ಉದ್ದದ ವರ್ತುಲ ರಸ್ತೆಯ ಅಭಿವೃದ್ಧಿಯನ್ನು (ರಾಷ್ಟ್ರೀಯ ಹೆದ್ದಾರಿ 4ರ ಕ್ಯಾತಸಂದ್ರ ಜಂಕ್ಷನ್‌ನಿಂದ ರಾಷ್ಟೀಯ ಹೆದ್ದಾರಿ 206ರ ಗುಬ್ಬಿ ಗೇಟ್‌ರವರೆಗೆ) ತುಮಕೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ವತಿಯಿಂದ ಎರಡು ಹಂತದಲ್ಲಿ ಅಭಿವೃದ್ಧಿ ಪಡಿಸಲಾಗುತ್ತಿದೆ.<br>ಹಂತ-1 ರ ಅಭಿವೃದ್ಧಿ ಯೋಜನೆಯನ್ನು ರೂ.52.47 ಕೋಟಿ ಮೊತ್ತದಲ್ಲಿ ಕೈಗೊಳ್ಳಲಾಗಿದ್ದು, ಇದರಲ್ಲಿ 7.10 ಕಿ.ಮೀ ಉದ್ದದ ಎರಡು ಪಥಗಳ ಸಾರಿಗೆ ಮಾರ್ಗವನ್ನು ಮೇಲ್ದರ್ಜೆಗೇರಿಸುವಿಕೆ ಹಾಗೂ ಪುನರ್-ಮೇಲ್ಪದರವನ್ನು (ಡಾಂಬರು) ಹಾಕುವಿಕೆ, ಸೇವಾ ರಸ್ತೆಗಳು, ಮಳೆ ನೀರು ಚರಂಡಿ ಇತ್ಯಾದಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>ಹಂತ-2ರ ಅಭಿವೃದ್ಧಿ ಯೋಜನೆಯನ್ನು ರೂ.32.50 ಕೋಟಿ ಮೊತ್ತದಲ್ಲಿ ಕೈಗೊಳ್ಳಲಾಗಿದ್ದು, ಇದರಲ್ಲಿ 0+500 ಚೈನೇಜ್‌ನಿಂದ 7+100 ಚೈನೇಜ್‌ರವರೆಗೆ 9 ಮೀಟರಗಳ ಅಗಲದ ಪ್ರಧಾನ ಸಾರಿಗೆ ಸಂಚಾರ ಮಾರ್ಗದ ಅಭಿವೃದ್ಧಿ (ಕ್ಯಾತಸಂದ್ರದಿಂದ ಕುಣಿಗಲ್ ವೃತ್ತದವರೆಗೆ) ಮತ್ತು ಎರಡೂ ಬದಿಗಳಲ್ಲಿ 5.5 ಮೀಟರ ಅಗಲದ ಸೇವಾ ಮಾರ್ಗದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>ಎರಡೂ ಹಂತಗಳು ಏಕಕಾಲದಲ್ಲಿ ಕಾರ್ಯಗತಗೊಳ್ಳುತ್ತಿವೆ. |

ಸಂಖ್ಯೆ: ನಅಇ 123 ಸಿಎಸ್‌ಎಸ್ 2020

(ಬಿ.ಎ.ಬಸವರಾಜು)
ನಗರಾಭಿವೃದ್ಧಿ ಸಚಿವರು.

## KARNATAKA LEGISLATIVE COUNCIL

| | | |
|---|---|---|
| Starred Question No | : | 227 (1806) |
| Name of the Member | : | Shri. Kantharaj (BML) (Elected from Urban Local Bodies) |
| To be replied on | : | 24-03-2020 |
| To be replied by | : | Hon'ble Minister for Urban Development. |

| Sl | QUESTION | ANSWER |
|---|---|---|
| A) | Whether Government is aware that around 15-20 km radius of Tumakuru, various projects viz Helicopter factory/food park/ ISRO/Industrial Estate, which is first in Asia/Mumbai-Bangalore-Chennai Industry Corridor are located; | Yes |
| B) | If yes, whether any Peripheral Ring Road, similar to BDA, will be developed around Tumakuru, which is growing day by day; | There is no proposal in Government for development of Peripheral Ring Road around Tumakuru City similar to that of BDA envisaged PRR in Bengaluru.<br><br>Under Smart Cities Mission, the redevelopment of existing Ring Road has been undertaken. |
| C) | As National Highway is running through Tumakuru City resulting in traffic congestion, what problem Government is facing in development of Peripheral Ring Road from Dabaspet-Koratagere-Shira-Gubbi-Kunigal and Dabaspet considering the future 10-15 years; When this Peripheral Ring Road project will be implemented? | Tumakuru Smart City Limited has undertaken redevelopment of existing Ring Road of length 10.50 km (from NH-4 Kyatasandra to NH 206 Gubbi) in 2 phases.<br><br>Phase 1 is being implemented at a cost of Rs. 52.47 Crore, which involves upgradation of existing road of length 7.10 km, asphalting, service roads, drains etc.<br><br>Phase 2 is being implemented at a cost of Rs. 32.50 Crore, which involves main road of width 9 mt from Chainage 0+500 to 7+100 and service roads on both sides. upgradation of existing road of length 7.10 km, asphalting, service roads, drains etc.<br><br>Both the phases are being implemented simultaneously. |

**No**: UDD 123 CSS 2020

(B.A.Basavaraja)
Minister for Urban Development